# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ -19

5ನೇ ವರ್ಷ 13ನೇ ಸಂಚಿಕೆ ಕೊಪ್ಪ 7-12-1986 ಭಾನುವಾರ ಬೆಲೆ 20 ಪೈಸೆ




## ಡಾ॥ ಶಾನಭಾಗ್ ಮನೆಯಲ್ಲಿ

## ಕ ಳ್ಳ ತ ನ

ಕೊಪ್ಪ: ಇಲ್ಲಿನ ಬಾಳಗಡಿ ರಸ್ತೆಯಲ್ಲಿರುವ ಡಾ॥ ಶಾನ್‌ಭಾಗ್‌ರವರ ಮನೆಯಲ್ಲಿ ನ. 2ರ ಸಂಜೆ 4.30ರಿಂದ 6.30ರ ನಡುವೆ ಕಳ್ಳತನ ನಡೆದಿದೆ.

ಸುಮಾರು 1500 ರೂ. ಬೆಲೆಯ ಕ್ಯಾಮೆರಾ, 150 ರೂ. ಬೆಲೆಯ ಬ್ಯಾಟರಿ ಮತ್ತಿತರ ವಸ್ತುಗಳು ಹಾಗೂ 4500 ರೂ. ನಗದು ಹಣ ಕಳುವಾಗಿದೆ.

ಪೋಲೀಸ್ ನಾಯಿಗಳನ್ನು ಕರೆ ತಂದರೂ ಅವು ರಿಕ್ಷಾ ಸ್ಟ್ಯಾಂಡ್‌ವರೆಗೆ ಬಂದು ಮುಂದೆ ಸುಳಿವು ನೀಡದಾದವು. ಸಬ್ ಇನ್‌ಸ್ಪೆಕ್ಟರ್ ಟಿ.ಡಿ. ದುರ್ಗಯ್ಯ ತನಿಖೆ ನಡೆಸುತ್ತಿದ್ದಾರೆ.

## ಮಲೆನಾಡಿನ 'ಸಿಅಂಡ್‌ಡಿ' ಭೂಮಿ 'ನೀಲಗಿರೀಕರಣ'ಗೊಳಿಸುವ

# ಬಿರ್ಲಾ ಒಪ್ಪಂದ ರದ್ದಿಗೆ ಆಗ್ರಹ

ಹರಿಹರಪುರ: ರಾಜ್ಯಸರ್ಕಾರ ಬಿರ್ಲಾನ ಹರಿಹರ ಪಾಲಿಫೈಬರ್ ಕಾರ್ಖಾನೆಗೆ ಅಗ್ಗದಲ್ಲಿ ಮೆದುಮರ ಒದಗಿಸಲು ಕಾರ್ಖಾನೆಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡಿದ್ದು, ಇದರನ್ವಯ ರಾಜ್ಯದ ವಿವಿಡೆಡೆ 'ಸಿ ಅಂಡ್ ಡಿ'(ಕೃಷಿ ಯೋಗ್ಯವಲ್ಲದ) ಭೂಮಿ ಎಂದು ಗುರ್ತಿಸಲ್ಪಡುವ ಭೂಮಿಯಲ್ಲಿ ನೀಲಗಿರಿ ಬೆಳೆಸಲು ಸಾವಿರಾರು ಎಕರೆಯನ್ನು ನೀಡಲು ಬದ್ಧವಾಗಿದೆ.

ಮಲೆನಾಡಿನ ಉದ್ದಗಲಕ್ಕೆ ಈಗ್ಗೆ ಸುಮಾರು 3 ವರ್ಷದಿಂದ ಅರಣ್ಯಇಲಾಖೆಯ ಸರ್ವೆ ವಿಭಾಗವು ನಡೆಸುತ್ತಿರುವ ಸರ್ವೆ ಹೀಗೆ 'ಸಿ ಅಂಡ್ ಡಿ' ಎಂದು ಘೋಷಿಸಲು ಭೂಮಿಯನ್ನು ಗುರ್ತಿಸುವುದಾಗಿದೆ ಎಂದು ರೈತರು ಮತ್ತು ಪರಿಸರ ಪ್ರೇಮಿಗಳು ಹಲವು ಸಾಕ್ಷ್ಯಾಧಾರಗಳ ಮೂಲಕ ಅನುಮಾನಿಸಿ ಅದನ್ನು ತೀವ್ರವಾಗಿ ಪ್ರತಿಭಟಿಸುತ್ತ ಬಂದಿದ್ದು, ಸದರಿ 'ಬಿರ್ಲಾ ಒಪ್ಪಂದ'ವನ್ನೇ ರದ್ದುಪಡಿಸಲು ಒತ್ತಾಯಿಸುತ್ತಿದ್ದಾರೆ. ಇಂಥದೊಂದು ಬೃಹತ್ ಪ್ರತಿಭಟನೆ ನ.20ರಂದು ಹರಿಹರಪುರದಲ್ಲಿ ಯಶಸ್ವಿಯಾಗಿ ನಡೆಯಿತು ಆದರೆ ಸರ್ಕಾರ (ಅರಣ್ಯ ಇಲಾಖೆ) ಮಾತ್ರ "ಮಲೆನಾಡಿನಲ್ಲೆಲ್ಲೂ ಬಿರ್ಲಾಗೆ ನೀಲಗಿರಿ ಬೆಳೆಸಲು ಭೂಮಿ ನೀಡಲಾಗುವುದಿಲ್ಲ;

(— 2ನೇ ಪುಟದಲ್ಲಿ "ನೀರಾವರಿ ಅಭಿವೃದ್ಧಿಗೆ 300 ಕೋಟಿ ರೂ." ಎಂಬಲ್ಲಿ ನೋಡಿ)

## ಪುರಸಭೆ ಮುಖ್ಯಾಧಿಕಾರಿಗಳ ಮೇಲೆ ಹಲ್ಲೆ

ಕೊಪ್ಪ: ನ. 2ರಂದು ಜೆಳಿಗ್ಗೆ ನ. ರಾ. ಪುರ ಕೋರ್ಟಿಗೆಂದು ಹೊರಟಿದ್ದ ಪುರಸಭಾ ಮುಖ್ಯಾಧಿಕಾರಿ ಆರ್. ಗುಂಡೂರಾವ್ ಮೇಲೆ ಎಚ್. ಎಸ್. ಸುಬ್ಬರಾಯ ಪ್ರಭು ಅಲಿಯಾಸ್ ಬುಳ್ಳ ಬಸ್ ಸ್ಟ್ಯಾಂಡಿನಲ್ಲಿ ಕೈ ಮಾಡಿದನೆಂದು ದೂರು ನೀಡಲಾಗಿದೆ.

ಅವಾಚ್ಯವಾಗಿ ನಿಂದಿಸುತ್ತ, ಬಸ್ಸಿಗೆ ಹತ್ತಲು ಬಿಡದೆ ಅಂಗಡಿಯೊಂದರ ಕಡೆಗೆ ಎಳೆದುಕೊಂಡು ಹೋದುದಲ್ಲದೆ, ಪೋಲೀಸ್ ಠಾಣೆಗೆ ಹೋಗಲು ರಿಕ್ಷಾ ಹತ್ತಿದಾಗ ಅದನ್ನೂ ಹೋಗಗೊಡಲಿಲ್ಲವೆನ್ನಲಾಗಿದೆ. "ನಮ್ಮ ಪುರಸಭಾ ಅಧ್ಯಕ್ಷರಿಗೆ ಅವಮಾನವಾಗುವಂತೆ ಮಾಡುತ್ತಿದ್ದೀಯಾ" ಎಂದು ಪದೇ ಪದೇ ಆತ ಹೇಳುತ್ತಿದ್ದುದಾಗಿ ಗುಂಡೂರಾವ್ ದೂರಿನಲ್ಲಿ ತಿಳಿಸಿ ಪೋಲೀಸರಿಂದ ಸೂಕ್ತ ಕ್ರಮವನ್ನೂ ರಕ್ಷಣೆಯನ್ನೂ ಕೋರಿದ್ದಾರೆ.

ಬುಳ್ಳನಿಗೆ 'ಬ್ಲಡ್ ಪ್ರೆಶರ್' ಹೆಚ್ಚಿದೆಯೆಂದು ವೈದ್ಯರೊಬ್ಬರು ಪೋಲೀಸರಿಗೆ ಹೇಳಿದ್ದು, ಆತನನ್ನು ಈವರೆಗೆ ಬಂಧಿಸಿಲ್ಲ.

# ನೀರಾವರಿ ಸಂಪನ್ಮೂಲ ಅಭಿವೃದ್ಧಿಗೆ ಈ ವರ್ಷ 300 ಕೋಟಿ ರೂ.

ಶೃಂಗೇರಿ: ರಾಜ್ಯ ಸರ್ಕಾರ ನೀರಾವರಿ ಸಂಪನ್ಮೂಲ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡುತ್ತಿದ್ದು, ಈ ಉದ್ದೇಶಕ್ಕಾಗಿ ಪ್ರಸ್ತುತ ವರ್ಷ 300 ಕೋಟಿ ರೂ. ಗಳನ್ನು ವೆಚ್ಚ ಮಾಡಲಿದೆ ಎಂದು ಲೋಕೋಪಯೋಗಿ ಮತ್ತು ನೀರಾವರಿ ಸಚಿವ ಎಚ್. ಡಿ. ದೇವೇಗೌಡ ಇಲ್ಲಿ ತಿಳಿಸಿದರು.

ಅವರು ನ. 27ರಂದು ಇಲ್ಲಿ 2.40 ಲಕ್ಷ ರೂ. ಗಳ ವೆಚ್ಚದಿಂದ ನಿರ್ಮಿಸಿರುವ ಹಿಂದುಳಿದ ವರ್ಗದ ವಿದ್ಯಾರ್ಥಿನಿಲಯದ ಉದ್ಘಾಟನೆ ಹಾಗೂ ಭಾರತಿ ಬೀದಿಯಲ್ಲಿ 3.50 ಲಕ್ಷ ರೂ.ಗಳ ವೆಚ್ಚದಿಂದ ಪುನರ್ ನಿರ್ಮಾಣ ಮಾಡಲಿರುವ ಸೇತುವೆ ಕಾರ್ಯಕ್ಕೆ ಶಂಕುಸ್ಥಾಪನೆ ನೆರವೇರಿಸಿ ಮಾತನಾಡುತ್ತಾ ಹಿಂದಿನ ಸರ್ಕಾರ ನೀರಾವರಿ ಸಂಪನ್ಮೂಲ ಅಭಿವೃದ್ಧಿಗೆ ಪ್ರತಿ ವರ್ಷ 120 ಕೋಟಿ ರೂ ಗಳನ್ನು ಮಾತ್ರ ವೆಚ್ಚ ಮಾಡುತ್ತಿತ್ತೆಂದರು. ಪ್ರಸ್ತುತ ಸರ್ಕಾರ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡುತ್ತಿದ್ದು ರಾಜ್ಯದ ಒಟ್ಟು ಆಯವ್ಯಯದ ಶೇ. 55 ಭಾಗ ಹಣವನ್ನು ಗ್ರಾಮಾಂತರ ಪ್ರದೇಶದ ಅಭಿವೃದ್ಧಿ ಕಾರ್ಯಗಳಿಗೆ ವೆಚ್ಚಮಾಡಲಾಗುತ್ತಿದೆ ಎಂದರು

ಆಡಳಿತ ವಿಕೇಂದ್ರೀಕರಣದ ದೃಷ್ಟಿಯಿಂದ ಜಾರಿಗೆ ತಂದಿರುವ ಪಂಚಾಯತ್ ರಾಜ್ ಚುನಾವಣೆಯ ನಂತರ ಪ್ರತಿ/ ಮಂಡಲ ಪಂಚಾಯಿತಿಗೆ ಪ್ರತಿವರ್ಷ ಸುಮಾರು 15–20ಲಕ್ಷ ರೂ.ಗಳ ಅನುದಾನವನ್ನು, ಜಿಲ್ಲಾ ಪರಿಷತ್‌ಗೆ ಸುಮಾರು 20ಕೋಟಿ ರೂ.ಗಳ ಅನುದಾನವನ್ನು ನೀಡಲಾಗುತ್ತದೆ ಎಂದರು

ಶೃಂಗೇರಿ ತಾಲ್ಲೂಕಿನಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಸುಮಾರು 2ಕೋಟಿ ರೂ.ಗಳ ವೆಚ್ಚದಿಂದ ಹಲವಾರು ನೂತನ ಸೇತುವೆ, ಕಟ್ಟಡ ಮತ್ತು ರಸ್ತೆಗಳನ್ನು ನಿರ್ಮಿಸಲಾಗಿದೆ ಎಂದರು.

ಸಮಾರಂಭದಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಅಧ್ಯಕ್ಷ ಕೆ. ಎಂ. ಶ್ರೀನಿವಾಸ್ ಮಾತನಾಡಿ ಶೃಂಗೇರಿ ತಾಲ್ಲೂಕಿನಲ್ಲಿ ಈಡೇರಿಸಿರುವ ಹಲವಾರು ಕಾರ್ಯಕ್ರಮಗಳನ್ನು ಸಭೆಗೆ ತಿಳಿಸಿ ಸರ್ಕಾರಕ್ಕೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಸಚಿವರು ಇದಕ್ಕೆ ಮೊದಲು ನರಸಿಂಹರಾಜಪುರ ತಾಲ್ಲೂಕಿನ ವಗಡೆ–ಅರಳಿಕೊಪ್ಪ ರಸ್ತೆಯಲ್ಲಿ ಬಕ್ರಿ ನದಿಗೆ ಅಡ್ಡಲಾಗಿ 3 ಲಕ್ಷ ರೂ.ಗಳ ವೆಚ್ಚದಿಂದ ನಿರ್ಮಿಸಲಿರುವ ಸೇತುವೆಗೆ, ಅಗ್ರಹಾರದಲ್ಲಿ 2.5 ಲಕ್ಷರೂ.ಗಳ ವೆಚ್ಚದಿಂದ ನಿರ್ಮಿಸಲಿರುವ ಪ್ರಾಥಮಿಕ ಪಾಠಶಾಲೆ ಕಟ್ಟಡಕ್ಕೆ, ಮತ್ತು 5ಲಕ್ಷರೂ.ಗಳ ವೆಚ್ಚದಿಂದ ನಿರ್ಮಿಸಲಿರುವ ಗ್ರಾಮೀಣ ಕುಟುಂಬ ಕಲ್ಯಾಣ ಕೇಂದ್ರ ಮತ್ತು ವಸತಿ ಗೃಹ ಕಟ್ಟಡಕ್ಕೆ ಶಂಕು ಸ್ಥಾಪನೆಯನ್ನು ನೆರವೇರಿಸಿದರು.

ಕೊಪ್ಪ ತಾಲ್ಲೂಕಿನ ಗಡಿಕಲ್–ಬೊಮ್ಲಾಪುರ ರಸ್ತೆಯ ಬಚ್ಚಣಿಕೆ ಹೊಳೆಗೆ 4 ಲಕ್ಷ ರೂ.ಗಳ ವೆಚ್ಚದಿಂದ ನಿರ್ಮಿಸಲಿರುವ ಸೇತುವೆ ನಿರ್ಮಾಣಕ್ಕೆ ಶಂಕುಸ್ಥಾಪನೆ ನೆರವೇರಿಸಿದ ಅವರು ಕಮ್ಮರಡಿಯಲ್ಲಿ ನಿರ್ಮಿಸಿರುವ ಜೂನಿಯರ್ ಕಾಲೇಜು ಮತ್ತು ಮೆಟ್ರಿಕ್ ಪೂರ್ವ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯದ ಕಟ್ಟಡಗಳನ್ನು ಉದ್ಘಾಟಿಸಿದರು

ಶಾಸಕ ಎಚ್.ಜಿ. ಗೋವಿಂದಗೌಡರು ಈ ಎಲ್ಲಾ ಸಮಾರಂಭಗಳ ಅಧ್ಯಕ್ಷತೆ ವಹಿಸಿದ್ದರು

## ಸರಳ ವಿವಾಹಕ್ಕೆ ಆಹ್ವಾನ

ಪ್ರಿಯರೇ,

**ಇದೇ ತಾ॥ 7-12-1986ನೇ ಭಾನುವಾರ**
**ಪೂರ್ವಾಹ್ನ 11-30 ಗಂಟೆಗೆ ಸರಿಯಾಗಿ**
**ಕೊಪ್ಪದ ಟೌನ್‌ಹಾಲ್ ಸಭಾಂಗಣದಲ್ಲಿ**

ನನ್ನ ತಂಗಿ

ಎಸ್. ಆರ್. ಸುನಂದ

ಮತ್ತು

ಡಿ. ಸಿದ್ದುಸ್ವಾಮಿ

(ಕುದುರೆಮುಖ ಯೋಜನೆ, ಮಂಗಳೂರು )

**ಇವರ ಸರಳ ವಿವಾಹ ಸಮಾರಂಭ ಏರ್ಪಡಿಸಿದ್ದೇವೆ.**

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಮುಖಂಡ ಶ್ರೀ ಬಿ. ಕೃಷ್ಣಪ್ಪ,
ಸಾಹಿತಿಗಳಾದ ಶ್ರೀ ಬಿ. ರಾಜಣ್ಣ, ಶ್ರೀ ಗುರುರಾಜ ಬೀಡೀಕರ್ ಮತ್ತು
ನಮ್ಮ ಕುಟುಂಬದ ಹಿತೈಷಿಗಳೂ, ಗೌರವಾನ್ವಿತ ರಾಜಕಾರಣಿಗಳೂ ಆದ
ಶ್ರೀ ಕಿರಕೋಡು ಸೀತಾರಾಮ ಭಟ್
ಇವರುಗಳು ಈ ಸಮಾರಂಭದಲ್ಲಿ ಭಾಗವಹಿಸುತ್ತಾರೆ.

ನಮ್ಮೆಲ್ಲ ಮಿತ್ರರು, ಹಿತೈಷಿಗಳು ಹಾಗೂ ನಮ್ಮ ಕುಟುಂಬದ ಅಭಿಮಾನಿಗಳು
ಇದೇ ಆಹ್ವಾನವನ್ನು ಮನ್ನಿಸಿ,

**ನಮ್ಮ ಈ ಸಂತೋಷ ಸಮಾರಂಭದಲ್ಲಿ ಭಾಗವಹಿಸಬೇಕಾಗಿ**
**ಆದರದಿಂದ ಆಹ್ವಾನಿಸುತ್ತಿದ್ದೇನೆ.**

ನಿಮ್ಮವ,
ಸಿರಿಮನೆ ನಾಗರಾಜ್

ಓದುಗರ ಪತ್ರ

# ಗಡಿಕಲ್ ಆಸ್ಪತ್ರೆಗೆ ವೈದ್ಯರನ್ನು ನೇಮಿಸಿ

ಮಾನ್ಯರೆ.

ಕೊಪ್ಪ ತಾಲ್ಲೂಕಿನ ಹಿರೇಕೊಡಿಗೆ ಅಥವಾ ಗಡೀಕಲ್ಲಿನ ಪ್ರಾಥಮಿಕ ಆರೋಗ್ಯ ಘಟಕ ಬೊಮ್ಲಾಪುರ, ಕುಂಬಾರಕೊಪ್ಪ, ಕೆಸವೆ ಇವುಗಳಿಗೆ ಕೇಂದ್ರ ಸ್ಥಾನದಲ್ಲಿದೆ. ಈಗ್ಗೆ 4–5 ತಿಂಗಳ ಹಿಂದೆ ಇಲ್ಲಿಯ ವೈದ್ಯಾಧಿಕಾರಿಗಳಿಗೆ ವರ್ಗವಾಗಿದೆ. ಸುಮಾರು 2 ವರ್ಷಗಳ ಹಿಂದೆ ಇಲ್ಲಿಯ ಜವಾನರೊಬ್ಬರು ಸಹಾ ಮೃತರಾಗಿದ್ದಾರೆ. ಈ ಎರಡೂ ಹುದ್ದೆಗಳು ಅವರುಗಳ ನಂತರ ಖಾಲಿಯಾಗಿಯೇ ಇವೆ. ಆದರೂ ತಾ|| 15–10–86 ರಂದು ಇಲ್ಲಿ ಪರವೂರಿನ ವೈದ್ಯರ ಮೂಲಕ "ಉದರದರ್ಶಕ" ಶಸ್ತ್ರ ಚಿಕಿತ್ಸೆ ಸಹ ನಡೆಯಿತು. ಜಿಲ್ಲಾ ಆರೋಗ್ಯಾಧಿಕಾರಿಗಳು ಈ ಆರೋಗ್ಯಘಟಕದತ್ತ ಗಮನ ಹರಿಸಿಲ್ಲವೆ? ನಿರುದ್ಯೋಗಿ ವೈದ್ಯರು ಸಾಕಷ್ಟಿರುವಾಗ ಇಂತಹ ನೂರಾರು ಹಳ್ಳಿಗಳಲ್ಲಿ ವೈದ್ಯರಿಲ್ಲದೆ ಬಳಲಬೇಕೆ?

ಜಿಲ್ಲಾ ಪರಿಷತ್‌ನ ಚುನಾವಣೆಯ "ಸಂಭ್ರಮ" ಆರಂಭವಾಗಿರುವ ಈ ಸಂದರ್ಭದಲ್ಲಾದರೂ ಶಾಸಕರಾಗಲಿ, ಸರ್ಕಾರದ ಪಕ್ಷದ ಉಮೇದುವಾರರಾಗಲಿ ಇಲ್ಲಿಗೆ ತುರ್ತಾಗಿ ವೈದ್ಯರ ನೇಮಕಾತಿಗೆ ಶ್ರಮಿಸಿ ತಮ್ಮ ಸೇವೆಯ ಪ್ರದರ್ಶನ ಕೋರುವುದು ಒಳಿತು.

**ಹೊಸಮನೆ ರಮೇಶ್,** ಹಿರೇಕೊಡಿಗೆ.

## ಕ. ಸಾ. ಪ. ಅಮೃತೋತ್ಸವ

ನ. ರಾ. ಪುರ: ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಪತಿಯಿಂದ ನ. 20 ಮತ್ತು 21 ರಂದು ಈ ತಾಲ್ಲೂಕಿನ 30 ಶಾಲೆಗಳಲ್ಲಿ ಕರ್ನಾಟಕದ ಕಲೆ. ಸಾಹಿತ್ಯ, ಜಲ–ವನ–ಪಶು–ಪಕ್ಷಿ–ಸಂಪತ್ತು, ಹಬ್ಬ–ಜಾತ್ರೆ, ಜಾನಪದ, ಇತಿಹಾಸ, ಕವಿ, ಸಾಹಿತಿ ಮುಂತಾದ ವಿವಿಧ ವಿಷಯಗಳ ಬಗ್ಗೆ ಉಪನ್ಯಾಸಗಳು ನಡೆದವು.

ಕಾರ್ಯಕ್ರಮವನ್ನು ಎಚ್. ಸಿ. ನಂಜುಂಡ ಭಟ್‌ರವರ ಅಧ್ಯಕ್ಷತೆಯಲ್ಲಿ ಬಿ. ಟಿ. ಸತ್ಯನಾರಾಯಣರೆಡ್ಡಿ ನ 20ರಂದು ಉದ್ಘಾಟಿಸಿದರು. ನ. 21ರಂದು ಪ್ರ. ದ. ಕಾಲೇಜಿನಲ್ಲಿ ವೀರಪ್ಪದೇವರ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಮೂಗ ಚಂದ್ರಶೇಖರ್ ಸಮಾರೋಪ ಭಾಷಣ ಮಾಡಿದರು ಕಾಲೇಜು ವಿದ್ಯಾರ್ಥಿಗಳಿಂದ ಮನರಂಜನೆ ಕಾರ್ಯಕ್ರಮ ನಡೆಯಿತು.

ಈ ಎಲ್ಲ ಕಾರ್ಯಕ್ರಮಗಳ ಯಶಸ್ಸಿಗೆ ನೆರವಾದ ಎಲ್ಲರನ್ನು ಕ.ಸಾ.ಪ. ತಾಲ್ಲೂಕ್ ಪ್ರತಿನಿಧಿ ಎಂ.ಐ. ಶ್ರೀನಿವಾಸ ಮೂರ್ತಿ ಕೃತಜ್ಞತೆಯಿಂದ ಸ್ಮರಿಸಿ ಮುಂದೆಯೂ ಸಹಕಾರ ಕೋರಿದ್ದಾರೆ.

## ಕೊಪ್ಪ ತಾ|| ಯುವಜನಮೇಳ

ಕುದುರೆಗುಂಡಿ: ಕೊಪ್ಪ ತಾಲ್ಲೂಕು ಮಟ್ಟದ ಯುವಜನ ಮೇಳವು ನ. 14 ಮತ್ತು 15ರಂದು ಇಲ್ಲಿ ನಡೆಸಲಾಯಿತು. ಎ. ಮನೋಹರ ರಾವ್ ಮೇಳವನ್ನು ಉದ್ಘಾಟಿಸಿದರು ಸಮಾರಂಭದ ಅಧ್ಯಕ್ಷತೆಯನ್ನು ಮನಮೋಹನ್ ಕಲ್ಲೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕ್ಷೇತ್ರಾಭಿವೃದ್ಧಿ ಅಧಿಕಾರಿ ಪಿ. ಬಾಲಪ್ಪ, ಜಿಲ್ಲಾ ಯುವಜನ ಮತ್ತು ಕ್ರೀಡಾಧಿಕಾರಿ ಮಂಜುನಾಥ್ ಇವರುಗಳು ಆಗಮಿಸಿದ್ದರು.

**ಮೇಳದ ಮುಕ್ತಾಯ ಸಮಾರಂಭ**

ನ 15ರಂದು ನಡೆದ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಮೂಗ ಚಂದ್ರಶೇಖರ್ ವಹಿಸಿದ್ದರು. ಕೊಪ್ಪ ಲಯನ್ಸ್ ಕ್ಲಬ್ ಅಧ್ಯಕ್ಷ ಶಿರೀಷ್ ಪಿ. ಗುರ್ಜರ್ ಬಹುಮಾನ ವಿತರಣೆ ಮಾಡಿದರು ಪ್ರಭಾಕರ ಆರ್. ಕಲ್ಲೆ, ವಿಜಯ ಅಜಿಲ, ಬಾಲಪ್ಪ, ಡಾ|| ಕೆ. ಜಿ. ಶ್ರೀನಿವಾಸ ಮೂರ್ತಿ ಮುಖ್ಯ ಅತಿಥಿಗಳಾಗಿದ್ದರು. ಎಚ್.ವಿ. ಚಕ್ರಪಾಣಿ ಸ್ವಾಗತಿಸಿ, ಎಚ್. ಎಸ್. ಕೃಷ್ಣ ಕುಮಾರ್ ವಂದಿಸಿದರು.

**ಕುಟುಂಬ ಯೋಜನೆ ಲಾಟರಿ :**

## ಕೊಪ್ಪ ತಾ||ಗೆ ಬಹುಮಾನ

ಕೊಪ್ಪ: ಕೊಪ್ಪ ತಾಲ್ಲೂಕಿನಲ್ಲಿ 1984–85ನೇ ಸಾಲಿನಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಈ ಕೆಳಕಂಡ ವೈದ್ಯಾಧಿಕಾರಿಗಳು, ಇಲಾಖೆಯ ನೌಕರರು, ಸ್ಥಳೀಯ ಸಂಸ್ಥೆಗಳು, ಇಲಾಖೇತರ ನೌಕರರು ಮತ್ತು ಸ್ಥಳೀಯರಿಗೆ ರಾಜ್ಯಪ್ರಶಸ್ತಿ ಮತ್ತು ನಗದು ಬಹುಮಾನ ಬಂದಿದೆ: ಕೊಪ್ಪ, ಹರಿಹರಪುರ, ಕಮ್ಮರಡಿ ಮತ್ತು ಜಯಪುರ ಆಸ್ಪತ್ರೆಗಳ ವೈದ್ಯಾಧಿಕಾರಿಗಳು, ಭಾಸ್ಕರ್ ಆಚಾರ್, ಕಮ್ಮರಡಿ; ಕೆ. ಲಕ್ಷ್ಮಮ್ಮ. ಕೊಪ್ಪ; ಗಿರಿಜಮ್ಮ, ಎಲೆಮಡ್ಲು; ವಿನಾಯಕ ಯುವಕ ರೈತ ಸಂಘ, ಕುದುರೆಗುಂಡಿ ಗೌರಮ್ಮ, ಮೆಣಸಿನಹಾಡ್ಯ; ದೇವಪ್ಪ, ಕೆಸಲೂರು; ಡಾ|| ಕೆ. ರಾಮರಾವ್, ಕಮ್ಮರಡಿ; ಶೈಲ, ಹರಿಹರಪುರ ಹಾಗೂ ಲೀಲಾವತಿ, ಬೊಮ್ಲಾಪುರ

# ನೀರಾವರಿ ಅಭಿವೃದ್ಧಿಗೆ 300 ಕೋಟಿ ರೂ.

(ಒಂದನೇ ಪುಟದಿಂದ)

ಈ ಸರ್ವೆ ಕಂದಾಯ ಇಲಾಖೆಯಿಂದ ಈ ಹಿಂದೆಯೆ ಅರಣ್ಯ ಇಲಾಖೆಗೆ ವರ್ಗಾಯಿಸಲ್ಪಟ್ಟಿರುವ ಭೂಮಿಯನ್ನು ಗುರ್ತಿಸಲು ಮಾತ್ರ" ಎಂದು ಹೇಳುತ್ತ ಬಂದಿದೆ.

ಆದರೆ ಈಮಾತು ಸುಳ್ಳು ಎಂಬುದಕ್ಕೆ ನಿದರ್ಶನ ಈಗ ದೊರೆತಿದೆ. ಈ ಒಪ್ಪಂದಕ್ಕೆ ಹಾಗೂ 'ಸಿ ಅಂಡ್ ಡಿ' ಗುರ್ತಿಸುವುದಕ್ಕೆ ತೀವ್ರ ವಿರೋಧವಿದ್ದ ಪ್ರಮುಖ ಪ್ರದೇಶಗಳಾದ ಕೊಪ್ಪ, ಸಾಗರ (ಮತ್ತು ತಕ್ಕಮಟ್ಟಿಗೆ ಶೃಂಗೇರಿ) ತಾ|| ಗಳನ್ನು ಬಿಟ್ಟು, ಈಗ ವಿರೋಧ ತೀಕ್ಷ್ಣವಾಗಿಲ್ಲದ ತೀರ್ಥಹಳ್ಳಿ ಮತ್ತು ಚಿಕ್ಕಮಗಳೂರು ತಾ|| ಗಳಲ್ಲಿ ಸುಮಾರು 3 ಸಾವಿರ ಹೆಕ್ಟೇರ್ ಪ್ರದೇಶವನ್ನು ಈ ಕಂಪೆನಿಗೆ ಗುತ್ತಿಗೆ ನೀಡಿರುವುದಾಗಿ ತಿಳಿದು ಬಂದಿದೆ.

ತೀರ್ಥಹಳ್ಳಿ ತಾ||ನಲ್ಲಿ ಈಗಾಗಲೇ 4–5 ವರ್ಷಗಳಿಂದ, ದಟ್ಟ ಕಾಡುಗಳಿರುವ (ಆದರೆ ಸರ್ಕಾರಿ ದಾಖಲೆಗಳಲ್ಲಿ ಬೋಳುಭೂಮಿ ಎನ್ನಿಸಿಕೊಂಡಿರುವ) ವ್ಯಾಪಕ ಪ್ರದೇಶಗಳನ್ನು ಭದ್ರಾವತಿಯ ಕಾಗದ ಕಾರ್ಖಾನೆ ಬುಲ್‌ಡೋಜರ್ ಬಳಸಿ 'ಬಯಲು'ಗೊಳಿಸುತ್ತಿದೆ. ಆದರೂ ಅಲ್ಲಿ ಪ್ರತಿಭಟನೆ ಸಿಡಿದಿಲ್ಲ.

ಬಹುಶಃ ಸರ್ಕಾರದ "ಬಂಜರು ಭೂಮಿ ಅಭಿವೃದ್ಧಿ" ಯೋಜನೆಗೆ ಸೂಕ್ತ ಪ್ರದೇಶಗಳನ್ನು ಕಲ್ಪಿಸುವುದು ಸರ್ಕಾರದ ಈ 'ದೃಢ' ಪ್ರಯತ್ನದ ಉದ್ದೇಶವೇನೋ!?

**ಪ್ರವೇಶ ಪರೀಕ್ಷೆ ಫಲಿತಾಂಶ ಪ್ರಕಟ :**

# ನವೋದಯ ಶಾಲೆ ಆರಂಭ ಡಿ. 15ಕ್ಕೆ

ಬಾಳೆಹೊನ್ನೂರು : ಇಲ್ಲಿಗೆ ಸಮೀಪದ ಕಾಫಿ ಸಂಶೋಧನಾ ಕೇಂದ್ರದಲ್ಲಿ ಈ ವರ್ಷದಿಂದ ಆರಂಭವಾಗಿರುವ ನವೋದಯ ಶಾಲೆಗೆ ಪ್ರವೇಶಕ್ಕಾಗಿ ನಡೆದ ಪರೀಕ್ಷೆಯ ಫಲಿತಾಂಶಗಳು ನ 29ರಂದು ಪ್ರಕಟವಾಗಿದ್ದು, ಡಿ. 15ಕ್ಕೆ ತರಗತಿಗಳು ಆರಂಭವಾಗುವ ನಿರೀಕ್ಷೆಯಿದೆ.

ಫಲಿತಾಂಶಗಳನ್ನು ಆಯಾ ವಿದ್ಯಾರ್ಥಿಯ ಪೋಷಕರಿಗೆ, ಶಾಲಾ ಮುಖ್ಯಸ್ಥರಿಗೆ ಹಾಗೂ ತಾ|| ಎ.ಇ.ಒ ರಿಗೆ ತಿಳಿಸಲಾಗಿದ್ದು ತೇರ್ಗಡೆಯಾದ ಮಕ್ಕಳನ್ನು ಕೂಡಲೇ ಶಾಲೆಗೆ ಸೇರಿಸಬೇಕೆಂದು ಪ್ರಿನ್ಸಿಪಾಲ್ ವಿನಂತಿಸಿದ್ದಾರೆ. ಸೂಕ್ತ ತಿಳುವಳಿಕೆಯಿಲ್ಲದೆ ಕೆಲವು ಮಕ್ಕಳು ಶಾಲೆಗೆ ಹಾಜರಾಗದೇ ಸಿಕ್ಕ ಅವಕಾಶವನ್ನು ತಪ್ಪಿಸಿಕೊಳ್ಳುವ ಸಾಧ್ಯತೆಯಿರುವುದರಿಂದ ಸ್ಥಳೀಯ ಸಾಮಾಜಿಕ ಕಾರ್ಯಕರ್ತರು ಈ ಮಕ್ಕಳನ್ನು ಕರೆತಂದು ಸೇರಿಸಲು ಸಹಕರಿಸಬೇಕೆಂದೂ ಅವರು ಕೋರಿದ್ದಾರೆ. ಪೋಷಕರು ಅಪೇಕ್ಷಿಸಿದಲ್ಲಿ ಈ ಮಕ್ಕಳಿಗೆ ಶಾಲೆಗೆ ಹಾಜರಾಗಲು ತಗಲುವ ಖರ್ಚನ್ನು ಭರಿಸಲಾಗುವುದು.

ಈ ಶಾಲೆಯ ಆರಂಭಕ್ಕೆ ಆಸಕ್ತಿ ವಹಿಸಿದವರೊಬ್ಬರಿಂದ ತಿಳಿದು ಬಂದಿರುವ ಕೆಲವು ಫಲಿತಾಂಶಗಳು ಹೀಗಿವೆ :

ಕೊಪ್ಪ ತಾ|| (ಒಟ್ಟು 11) :– ಸೂರ್ಯದೇವಸ್ಥಾನ–1, ಬಸರಿಕಟ್ಟೆ–3 (ಬಿ.ಎಸ್. ಸುಬ್ಬಲಕ್ಷ್ಮಿ), ಕುದುರೆಗುಂಡಿ–1 (ಎಚ್. ಡಿ. ಲೋಹಿತ್); ಹಾಲ್ಮುತ್ತೂರು – 1 (ಎಂ.ಸಿ. ಸುಮಾ), ಕೊಪ್ಪ–4 (ಭಾರತಿ, ನಿರ್ಮಲಾ ತಿಮ್ಮಪ್ಪ, ಬಿ. ಬಿ. ಶ್ವೇತಾ, ಎಚ್. ಎಲ್. ರಾಘವೇಂದ್ರ), ಹೊಸಕೊಪ್ಪ–1 (ಅಭಿಷೇಕ್). ಜಯಪುರ, ಹರಿಹರಪುರಗಳಲ್ಲಿ ಯಾರೂ ತೇರ್ಗಡೆಯಾಗಿಲ್ಲ.

ಶೃಂಗೇರಿ ತಾ|| (ಒಟ್ಟು 5) :– ಕಿಗ್ಗ –2 (ಬಿ. ಜ್ಯೋತಿ, ಶಾಂತಾಲಕ್ಷ್ಮಿ), ಹೊಳೆಕೊಪ್ಪ–2 (ಕೆ. ಎಸ್. ಅಶೋಕ್ ಬಿ. ಶೀನ ಮರಕಾಲ, ಎಚ್.ಕೆ. ತ್ರಿವೇಣಿ) ಭಾರತೀ ನಗರ–1 (ರಮಾನಂದ),

ನ. ರಾ. ಪುರ ತಾ||–10: ಇದರಲ್ಲಿ ಬಾಳೆಹೊನ್ನೂರಿಗೆ 3

# ಸಂಕ್ಷಿಪ್ತ ಸುದ್ದಿಗಳು

**ನೂತನ ಪದಾಧಿಕಾರಿಗಳು**

ಬಂಡಿಗಡಿ: ಇಲ್ಲಿನ ಅಭಿಮಾನಿ ಯುವಕ ಸಂಘಕ್ಕೆ ನ 28ರಂದು ನೂತನ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಯಿತು. ಸಂಘದಅಧ್ಯಕ್ಷರಾಗಿ ಎಸ್.ಎಂ. ಲಿಂಗಪ್ಪ, ಉಪಾಧ್ಯಕ್ಷರಾಗಿ ಬಿ.ಎಲ್. ಭಾಸ್ಕರ್, ಕಾರ್ಯದರ್ಶಿ ಎಂ. ಎಸ್. ಪುರುಶೋತ್ತಮ, ಸಹ ಕಾರ್ಯದರ್ಶಿ ಎಂ.ಎಂ. ಪುಟ್ಟಪ್ಪ, ಖಜಾಂಚಿ ಎಸ್.ಬಿ. ನಾಗರಾಜ್, ಗ್ರಂಥಪಾಲಕರಾಗಿ ಈ.ಕೆ. ಪ್ರೇಂಕುಮಾರ್ ಆಯ್ಕೆಯಾದರು.

**ಕುದುರೆಗುಂಡಿ ಯುವ ಕಾಂಗ್ರೆ**

ಕುದುರೆಗುಂಡಿ : ಇಲ್ಲಿ ನ. 18ರಂದು ಮನಮೋಹನ ಕಲ್ಲೆಯವರ ಅಧ್ಯಕ್ಷತೆಯಲ್ಲಿ ಯುವ ಕಾಂಗ್ರೆಸ್ ಸಭೆ ನಡೆದು, ಸುಧಾಕರ (ಅಧ್ಯಕ್ಷ), ಅಬುಬಕರ್ (ಕಾರ್ಯದರ್ಶಿ) ಚಕ್ರಪಾಣಿ (ಖಜಾಂಚಿ) ಇವರನ್ನೊಳಗೊಂಡ ಸಮಿತಿ ರಚಿಸಲಾಯಿತು.

**ಗೃಹ ನಿರ್ಮಾಣ ಸಂಘದ ಅಧ್ಯಕ್ಷರಾಗಿ ವಸಂತಅಜಿಲ**

ಕೊಪ್ಪ: ಇಲ್ಲಿನ ಟೌನ್ ಗೃಹ ನಿರ್ಮಾಣ ಸಹಕಾರ ಸಂಘದ ಅಧ್ಯಕ್ಷರಾಗಿ ಕೆ.ವಸಂತ ಅಜಿಲ ಈಚೆಗೆ ಪುನರಾಯ್ಕೆಯಾದರು. ಎ. ಚ್. ಶ್ರೀಶಶಿಕುಮಾರ್ ಗೌರವ ಕಾರ್ಯದರ್ಶಿಯಾಗಿದ್ದಾರೆ. ಕಳೆದ ಐದು ವರ್ಷಗಳಿಂದ ಗೌ|| ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದ ಅಚ್ಯುತ ರಾವ್ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

**ಹಾಲು ಉತ್ಪಾದಕರ ಸಂಘಕ್ಕೆ ಆಯ್ಕೆ**

ಬಿಳಾಲುಕೊಪ್ಪ : ಇಲ್ಲಿನ ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಬಿ. ವಿ. ಶ್ರೀಧರ ರಾವ್ ಅಧ್ಯಕ್ಷರಾಗಿ ಮತ್ತು ಈ ಕೆಳಕಂಡವರು ನಿರ್ದೇಶಕರುಗಳಾಗಿ ಆಯ್ಕೆಯಾಗಿದ್ದಾರೆ: ಜೆ. ಕೆ ಶಿವಶಂಕರ್, ಬಿ. ಎನ್ ವಾಸುದೇವಮೂರ್ತಿ, ಕೆ. ವಿ.ಗುರುಮೂರ್ತಿ ತಿಮ್ಮಯ್ಯ, ಎಂ. ಎಸ್. ಶ್ರೀಕರ, ಕೆ. ಜೆ. ರಾಜು, ಎಂ. ಜೆ. ಶಿವಶಂಕರ್, ಶ್ರೀಮತಿ ಶೇಷಮ್ಮ.

**ಉಚಿತ ಕಾನೂನು ನೆರವು ಶಿಬಿರಗಳು**

ನ.ರಾ. ಪುರ: ಇಲ್ಲಿನ ತಾ|| ಕಾನೂನು ನೆರವು ಸಮಿತಿ ನವೆಂಬರ್ ತಿಂಗಳಲ್ಲಿ ಉಚಿತ ಕಾನೂನು ನೆರವಿನ ಎರಡು ಶಿಬಿರಗಳನ್ನು ನಡೆಸಿತು

ನ. 16 ರಂದು ಬಾಳೆಹೊನ್ನೂರಿನಲ್ಲಿ ನಡೆದ ಶಿಬಿರವನ್ನು ವಕೀಲರಾದ ವೈ. ಎಂ. ಸೂರ್ಯನಾರಾಯಣ ರಾವ್ ಅಧ್ಯಕ್ಷತೆಯಲ್ಲಿ ಸ್ಥಳೀಯ ರೋಟರಿ ಅಧ್ಯಕ್ಷ ಮಹಮ್ಮದ್ ಹಸನ್ ಉದ್ಘಾಟಿಸಿದರು. ವಕೀಲರಾದ ಎಚ್.ಎಸ್. ರಾಮರಾವ್, ಎಚ್. ಕೃಷ್ಣಮೂರ್ತಿ, ಸೂರ್ಯನಾರಾಯಣ ರಾವ್ ಕಾನೂನು ಸಲಹೆಗಳನ್ನು ನೀಡಿದರು. ಪಿ. ಆರ್. ಶ್ರೀನಿವಾಸಮೂರ್ತಿ ಸ್ವಾಗತಿಸಿದರು.

ನ. 23ರಂದು ಶೃಂಗೇರಿಯಲ್ಲಿ ನಡೆದ ಶಿಬಿರವನ್ನು ಎಚ್. ಬೊಮ್ಮಪ್ಪನವರ ಅಧ್ಯಕ್ಷತೆಯಲ್ಲಿ ವಕೀಲ ಮೂಗ ಚಂದ್ರಶೇಖರ್ ಉದ್ಘಾಟಿಸಿದರು ಎಚ್. ಎಸ್. ರಾಮರಾವ್, ಸೀತೂರು ಚಂದ್ರಶೇಖರ ರಾವ್ ಉಚಿತ ಕಾನೂನು ಸಲಹೆ ನೀಡಿದರು.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ